# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **1166** |
| ಸದಸ್ಯರ ಹೆಸರು | : | ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 07-03-2022 |
| ಉತ್ತರಿಸುವ ಸಚಿವರು | : | ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |

***

| | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಯ ಎಲ್ಲಾ ಗ್ರಾಮಗಳಿಗೂ ನಿರಂತರ ಜ್ಯೋತಿ ಯೋಜನೆಯಡಿ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆಯೇ; ಇಲ್ಲದಿದ್ದಲ್ಲಿ, ಯಾವ ಯಾವ ಗ್ರಾಮಗಳಿಗೆ ಈ ಯೋಜನೆಯಡಿ ವಿದ್ಯುತ್ ಸರಬರಾಜು ವ್ಯವಸ್ಥೆ ಇನ್ನೂ ಕಲ್ಪಿಸಿರುವುದಿಲ್ಲ; ಯಾಕೆ ಕಲ್ಪಿಸಿರುವುದಿಲ್ಲ; ಯಾವ ಕಾಲಮಿತಿಯೊಳಗೆ ಈ ಗ್ರಾಮಗಳಿಗೆ ವಿದ್ಯುತ್ ಸರಬರಾಜು ಮಾಡಲಾಗುವುದು; (ಮಾಹಿತಿ ನೀಡುವುದು) | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಯಲ್ಲಿ ಬರುವ ಎಲ್ಲಾ ಗ್ರಾಮಗಳಿಗೂ ಈಗಾಗಲೇ ನಿರಂತರ ಜ್ಯೋತಿ ಯೋಜನೆಯಡಿ ವಿದ್ಯುತ್ ಸರಬರಾಜು ಕಲ್ಪಿಸಲಾಗಿದ್ದು, ನಿರಂತರ ಜ್ಯೋತಿ ಯೋಜನೆಯನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯಲ್ಲಿ 3 ಹಂತದಲ್ಲಿ ಪೂರ್ಣಗೊಳಿಸಲಾಗಿರುತ್ತದೆ.<br><br>ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಯೂ ಸೇರಿದಂತೆ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯಲ್ಲಿ ಯಾವುದೇ ಗ್ರಾಮಗಳಿಗೆ ನಿರಂತರ ಜ್ಯೋತಿ ಯೋಜನೆಯಡಿ ವಿದ್ಯುತ್ ಸಂಪರ್ಕ ಕಲ್ಪಿಸಲು ಬಾಕಿ ಇರುವುದಿಲ್ಲ. |
| ಆ) | ನಿರಂತರ ಜ್ಯೋತಿ ಯೋಜನೆ ಜಾರಿ ಬಂದು ಹಲವಾರು ವರ್ಷಗಳು ಕಳೆದಿದ್ದರೂ ಸಹ ರಾಜ್ಯದ ನೂರಾರು ಗ್ರಾಮಗಳಿಗೆ ಈ ಯೋಜನೆಯಡಿ ಇನ್ನೂ ವಿದ್ಯುತ್ ಸರಬರಾಜು ವ್ಯವಸ್ಥೆ ಕಲ್ಪಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಈ ಗ್ರಾಮಗಳಿಗೆ ವಿದ್ಯುತ್ ಸರಬರಾಜು ಮಾಡಲಾಗುವುದು? (ವಿವರ ನೀಡುವುದು) | ರಾಜ್ಯದ ವಿದ್ಯುತ್ ಸರಬರಾಜು ಕಂಪನಿಗಳಾದ ಬೆಸ್ಕಾಂ, ಸೆಸ್ಕ್, ಹೆಸ್ಕಾಂ ಮತ್ತು ಜೆಸ್ಕಾಂಗಳ ವ್ಯಾಪ್ತಿಯಲ್ಲಿ ನಿರಂತರ ಜ್ಯೋತಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದ್ದು, ಅವುಗಳ ವಿವರಗಳು ಕೆಳಕಂಡಂತಿವೆ:-<br>**ಬೆಸ್ಕಾಂ :**<br>ನಿರಂತರ ಜ್ಯೋತಿ ಯೋಜನೆಯು 2019 ರ ಅಂತ್ಯಕ್ಕೆ ಪೂರ್ಣಗೊಂಡಿರುತ್ತದೆ. ಸದರಿ ಯೋಜನೆಯಡಿ ಎಲ್ಲಾ ಗ್ರಾಮಗಳಿಗೂ ನಿರಂತರ ವಿದ್ಯುತ್ ಸರಬರಾಜು ಈಗಾಗಲೇ ಕಲ್ಪಿಸಲಾಗಿದೆ ಮತ್ತು ಸದರಿ ಯೋಜನೆಯಡಿಯಲ್ಲಿ ಯಾವುದೇ ಗ್ರಾಮಗಳಿಗೆ ವಿದ್ಯುತ್ ಸರಬರಾಜು ವ್ಯವಸ್ಥೆ ಕಲ್ಪಿಸುವುದು ಬಾಕಿ ಇರುವುದಿಲ್ಲ.<br><br>ಆದಗ್ಯೂ, ನಿರಂತರ ಜ್ಯೋತಿ ಯೋಜನೆಯಡಿ ಬಿಟ್ಟು ಹೋಗಿರುವ ಮನೆಗಳಿಗೆ ನಿರಂತರ ಜ್ಯೋತಿ ಫೀಡರ್ ಗಳಿಂದ ನಿರಂತರ ವಿದ್ಯುತ್ ಕಲ್ಪಿಸಲು ಕೇಂದ್ರ ಸರ್ಕಾರದ ಯೋಜನೆಯಾದ Revamped Distribution Sector Scheme (RDSS) ನಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. |

**ಸೆಸ್ಕ್ :-**

ಚಾವಿಸನಿನಿ ವ್ಯಾಪ್ತಿಯಲ್ಲಿ 179 ಸಂಖ್ಯೆಯ ಗ್ರಾಮಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಗ್ರಾಮಗಳಿಗೂ ನಿರಂತರ ಜ್ಯೋತಿ ಯೋಜನೆಯು ಅನುಷ್ಠಾನಗೊಂಡಿರುತ್ತದೆ.

ನಿರಂತರ ಜ್ಯೋತಿ ಯೋಜನೆ ಅನುಷ್ಠಾನಗೊಳ್ಳದ 179 ಗ್ರಾಮಗಳಿಗೆ RDSS ಯೋಜನೆಯಲ್ಲಿ ನಿರಂತರ ವಿದ್ಯುತ್ ಸಂಪರ್ಕ ಕಲ್ಪಿಸಲು ಉದ್ದೇಶಿಸಿದ್ದು, ಸದರಿ ಯೋಜನೆಗೆ ಅನುಮೋದನೆ ದೊರೆತ ನಂತರ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುವುದು.

**ಹೆಸ್ಕಾಂ:**

ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ 6 ಜಿಲ್ಲೆಗಳ ಗ್ರಾಮಗಳಿಗೆ ನಿರಂತರ ಜ್ಯೋತಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿರುತ್ತದೆ.

ಮುಂದುವರೆದು ಉತ್ತರ ಕನ್ನಡ ಜಿಲ್ಲೆಯಲ್ಲಿ ಈಗಾಗಲೇ ನಿರಂತರ ವಿದ್ಯುತ್ ಪೂರೈಕೆ ಮಾಡುತ್ತಿರುವುದರಿಂದ ನಿರಂತರ ಜ್ಯೋತಿ ಯೋಜನೆಯನ್ನು ಅನುಷ್ಠಾನಗೊಳಿಸಿರುವುದಿಲ್ಲ.

**ಜೆಸ್ಕಾಂ:**

ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯಲ್ಲಿ ಒಟ್ಟು 4116 ಗ್ರಾಮಗಳಿದ್ದು, ಅವುಗಳ ಪೈಕಿ 4053 ಸಂಖ್ಯೆಯ ಗ್ರಾಮಗಳಿಗೆ ನಿರಂತರ ಜ್ಯೋತಿ ಯೋಜನೆಯಡಿ ವಿದ್ಯುತ್ ಸಂಪರ್ಕ ಕಲ್ಪಿಸಲಾಗಿರುತ್ತದೆ. ಉಳಿದ 63 ಗ್ರಾಮಗಳಿಗೆ ನಿರಂತರ ಜ್ಯೋತಿ ಯೋಜನೆಯಡಿ ವಿದ್ಯುತ್ ಸಂಪರ್ಕ ಕಲ್ಪಿಸಲು ಕೇಂದ್ರ ಸರ್ಕಾರದ ಯೋಜನೆಯಾದ Revamped Distribution Sector Scheme (RDSS) ನಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. ಅನುಮೋದನೆ ದೊರೆತ ನಂತರ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುವುದು.

**ಮೆಸ್ಕಾಂ :**

ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯಲ್ಲಿ ನಿರಂತರ ಜ್ಯೋತಿ ಯೋಜನೆಯು ಅನುಷ್ಠಾನಗೊಂಡಿರುವುದಿಲ್ಲ. ಆದಾಗ್ಯೂ, ಕೇಂದ್ರ ಸರ್ಕಾರದ ದೀನ ದಯಾಳ್ ಉಪಾಧ್ಯಾಯ ಗ್ರಾಮ ಜ್ಯೋತಿ ಯೋಜನೆಯಡಿ ಶಿವಮೊಗ್ಗ ಹಾಗೂ ಚಿಕ್ಕಮಗಳೂರು ಜಿಲ್ಲೆಗಳ ಗ್ರಾಮೀಣ ಫೀಡರ್ ಗಳಲ್ಲಿ ಕೃಷಿ ಹಾಗೂ ಕೃಷಿಯೇತರ ಸ್ಥಾವರಗಳನ್ನು ಬೇರ್ಪಡಿಸಲು 'ಫೀಡರ್ ಬೇರ್ಪಡಿಸುವಿಕೆ' ಕಾಮಗಾರಿಯನ್ನು ಒಟ್ಟು 1289 ಗ್ರಾಮಗಳಲ್ಲಿ ಅನುಷ್ಠಾನಗೊಳಿಸಲಾಗಿರುತ್ತದೆ.

...3

| | | |
|---|---|---|
| | | ಮುಂದುವರೆದು, ಪ್ರಸ್ತುತ RDSS ಯೋಜನೆಯಡಿ ಶಿವಮೊಗ್ಗ ಹಾಗೂ ಚಿಕ್ಕಮಗಳೂರು ಜಿಲ್ಲೆಗಳಲ್ಲಿ 762 ಗ್ರಾಮಗಳಿಗೆ 79 ಗ್ರಾಮೀಣ ಫೀಡರಗಳಲ್ಲಿ 'ಫೀಡರ್ ಬೇರ್ಪಡಿಸುವಿಕೆ' ಕಾಮಗಾರಿ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ.<br><br>ಉಳಿದಂತೆ, ಶಿವಮೊಗ್ಗ ಹಾಗೂ ಚಿಕ್ಕಮಗಳೂರು ಜಿಲ್ಲೆಗಳ 7 ತಾಲ್ಲೂಕುಗಳ 82 ಗ್ರಾಮೀಣ ಫೀಡರ್ ಗಳು ಮಲೆನಾಡು ಪ್ರದೇಶದಲ್ಲಿರುವುದರಿಂದ ಹಾಗೂ ಭೌಗೋಳಿಕ/ತಾಂತ್ರಿಕ ಕಾರಣದಿಂದಾಗಿ ಈ ಫೀಡರ್ ಗಳಲ್ಲಿ 'ಫೀಡರ್ ಬೇರ್ಪಡಿಸುವಿಕೆ' ಕಾಮಗಾರಿ ಕೈಗೊಳ್ಳುವುದು ಕಷ್ಟ ಸಾಧ್ಯವಾಗಿರುತ್ತದೆ.<br><br>ಅಲ್ಲದೆ, ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳಲ್ಲಿಯೂ ಭೌಗೋಳಿಕ ಹಾಗೂ ತಾಂತ್ರಿಕ ಕಾರಣದಿಂದಾಗಿ 'ಫೀಡರ್ ಬೇರ್ಪಡಿಸುವಿಕೆ' ಕಾಮಗಾರಿಯನ್ನು ಕೈಗೆತ್ತಿಕೊಂಡಿರುವುದಿಲ್ಲ. ಆದಾಗ್ಯೂ, ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳ ಗ್ರಾಮಗಳಿಗೆ ನಿರಂತರ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. |

ಸಂಖ್ಯೆ: ಎನರ್ಜಿ 50 ಇಬಿಎಸ್ 2022

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು
ಸಂಸ್ಕೃತಿ ಸಚಿವರು